ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತಮೂರನೆಯ ಅಧಿವೇಶನ

ಮಂಗಳವಾರ, ದಿನಾಂಕ: 2ನೇ ಫೆಬ್ರವರಿ, 2021

ರಾಜ್ಯದ N.C.D.E.X ಮತ್ತು ಅನ್ನಭಾಗ್ಯ ಯೋಜನೆ ಕುರಿತು

ಶ್ರೀ ಹೆಚ್.ಎಂ.ರಮೇಶಗೌಡ (ವಿಧಾನಸಭೆಯಿಂದ ಚುನಾಯಿತರಾದವರು)

193(266) ಮಾನ್ಯ ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) N.C.D.E.X ಬೆಂಬಲದಿಂದ ರಾಜ್ಯ ಆಹಾರ ಮತ್ತು ನಾಗರಿಕ ಸರಬರಾಜು ನಿಗಮದಲ್ಲಿ ಪ್ರತ್ಯೇಕವಾಗಿ ಕೋಶವೊಂದನ್ನು ಸ್ಥಾಪಿಸಲಾಗಿದೆಯೇ; ಹಾಗಿದ್ದಲ್ಲಿ, ಕೋಶದ ಗುರಿ ಮತ್ತು ಉದ್ದೇಶಗಳೇನು; (ವಿವರ ನೀಡುವುದು)

(ಆ) ಅನ್ನಭಾಗ್ಯ ಯೋಜನೆ ಕುರಿತು ಅಧ್ಯಯನ ನಡೆಸಲು ಯಾವುದಾದರೂ ಸಂಸ್ಥೆಗೆ ಸರ್ಕಾರದ ವತಿಯಿಂದ ಕೋರಿಕೆಯನ್ನು ನೀಡಲಾಗಿರುವುದೇ; ಹಾಗಿದ್ದಲ್ಲಿ, ಯಾವ ಸಂಸ್ಥೆಗೆ ಅಧ್ಯಯನ ನಡೆಸಲು ಕೋರಲಾಗಿತ್ತು; ಆ ಸಂಸ್ಥೆ ಅಧ್ಯಯನ ನಡೆಸಿ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುವುದೇ;

(ಇ) ಹಾಗಿದ್ದಲ್ಲಿ, ವರದಿಯಲ್ಲಿ ನೀಡಲಾದಂತೆ ಅನ್ನಭಾಗ್ಯ ಯೋಜನೆ ಕುರಿತು ಅನುಕೂಲ ಮತ್ತು ಅನಾನುಕೂಲಗಳೇನು; (ವಿವರ ನೀಡುವುದು)

(ಈ) ಅನ್ನಭಾಗ್ಯ ಯೋಜನೆಯಡಿ ಅಕ್ಕಿ ವಿತರಿಸುವಂತೆ ರಾಗಿ,ಜೋಳ, ಬೇಳೆಕಾಳುಗಳು ಮುಂತಾದ ಆಹಾರ ಸಾಮಾಗ್ರಿಗಳನ್ನು ವಿತರಿಸುವ ಯೋಜನೆ ಕುರಿತು ಸರ್ಕಾರ ಚಿಂತನೆ ನಡೆಸಿದೆಯೇ; ಹಾಗಿದ್ದಲ್ಲಿ, ಈ ಯೋಜನೆಯನ್ನು ಯಾವಾಗ ಜಾರಿಗೊಳಿಸಲಾಗುವುದು;

(ಉ) ಪ್ರಸಕ್ತ ಸಾಲಿನಲ್ಲಿ ಅನ್ನಭಾಗ್ಯಕ್ಕೆ ನೀಡಲಾದ ಅನುದಾನದಲ್ಲಿ ಎಷ್ಟು ಅನುದಾನ ಉಳಿಕೆಯಾಗಿದೆ; ಹಾಗಿದ್ದಲ್ಲಿ, ಬಿ.ಪಿ.ಎಲ್ ಕುಟುಂಬಗಳಿಗೆ ಪಡಿತರ ವಿತರಿಸುವಂತೆ ಎ.ಪಿ.ಎಲ್ ಕುಟುಂಬಗಳಿಗೂ ಸಹ ಪಡಿತರ ವಿತರಿಸುವ ಕುರಿತು ಸರ್ಕಾರದ ಮುಂದೆ ಪ್ರಸ್ತಾವನೆ ಇದೆಯೇ; ಹಾಗಿದ್ದಲ್ಲಿ, ಯಾವಾಗ ವಿತರಿಸಲಾಗುವುದು;

(ಊ) ಎ.ಪಿ.ಎಲ್ ಕುಟುಂಬದವರಿಗೂ ಪಡಿತರ ವಿತರಿಸುವುದರಿಂದ ಸರ್ಕಾರಕ್ಕೆ ಬೇಕಾಗುವ ಅನುದಾನ ಎಷ್ಟು ? (ವಿವರ ನೀಡುವುದು)